**ಜಂತೂನಾಮಿಹ ಸಂಸ್ಕಾರೋ ಭೂತೇಷ್ವಂತರ್ಗತೋ ಮತಃ ।**
**ಪ್ರತ್ಯಾಖ್ಯಾಯ ಚ ಭೂತಾನಿ ಕಾರ್ಯೋತ್ಪತ್ತಿರ್ನ ವಿದ್ಯತೇ ॥ ೧೭೯ ॥**

**ತಸ್ಮಾತ್ಪರಿಮಿತಾ ಭೇದಾಃ ಸ್ಮೃತಾಃ ಕಾರ್ಯಾತ್ಮಕಾಸ್ತು ತೇ ।**
**ಕಾರಣಾತ್ಮಕಾಸ್ತಥೈವ ಸ್ಯುರ್ಭೇದಾ ಯೇ ಮಹದಾದಯಃ ॥ ೧೮೦ ॥**

**ಇತ್ಯೇಷ ಸನ್ನಿವೇಶೋ ವೋ ಮಯಾ ಪ್ರೋಕ್ತೋ ವಿಭಾಗಶಃ ।**
**ಸಪ್ತದ್ವೀಪಸಮುದ್ರಾಯಾ ಯಥಾತಥ್ಯೇನ ವೈ ದ್ವಿಜಾಃ ॥ ೧೮೧ ॥**

**ವಿಸ್ತಾರಾನ್ಮಂಡಲಾಚ್ಚೈವ ಪ್ರಸಂಖ್ಯಾತೇನ ಚೈವ ಹಿ ।**
**ವೈಶ್ವರೂಪಂ ಪ್ರಧಾನಸ್ಯ ಪರಿಮಾಣೈಕದೇಶಿಕಂ ॥ ೧೮೨ ॥**

**ಅಧಿಷ್ಠಾನಂ ಭಗವತೋ ಯಸ್ಯ ಸರ್ವಮಿದಂ ಜಗತ್ ।**
**ಏವಂ ಭೂತಗಣಾಃ ಸಪ್ತ ಸನ್ನಿವಿಷ್ಟಾಃ ಪರಸ್ಪರಂ ॥ ೧೮೩ ॥**

---

೧೭೯. ಭೂತಗಳ ಸಂಸ್ಕಾರವೆಂದರೆ ಮತ್ತೊಂದು ವಸ್ತುವಿನಿಂದ ರೂಪಾಂತರವನ್ನು ಹೊಂದುವುದು. ಅಂತಹ ಭೂತಗಳೇ ಇಲ್ಲದಿದ್ದರೆ ಕಾರ್ಯೋತ್ಪತ್ತಿಯು ಹೇಗೆ ತಾನೆ ಆಗುವುದು.

೧೮೦. ಆದುದರಿಂದ ಮಹದಾದಿಗಳಿಗೂ ಭೂತಾದಿಗಳೂ ಕಾರ್ಯಕಾರಣರೂಪದಿಂದ ಭೇದಗಳು ವ್ಯಕ್ತವಾಗಿವೆ. ಭೂತಾದಿಗಳು ಮಹತ್ತದ ಕಾರ್ಯವಾಗಿದ್ದರೂ ಶರೀರಾದಿಗಳಿಗೆ ಕಾರಣಗಳಾಗಿವೆ

೧೮೧. ಎಲೈ ವಿಪ್ರೋತ್ತಮರೇ, ಈ ರೀತಿಯಾಗಿ ಭೂಮಂಡಲದ ವಿಭಾಗಗಳನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ನಿರೂಪಿಸಿರುತ್ತೇನೆ. ಆ ಭೂಮಂಡಲವು ಸಪ್ತದ್ವೀಪಗಳು, ಸಪ್ತಸಮುದ್ರ ಇವುಗಳಿಂದ ವ್ಯಾಪ್ತವಾಗಿದೆ. ಎಂಬ ಸರ್ವವಿಷಯಗಳನ್ನೂ ಯಥಾರ್ಥವಾಗಿ ನಿರೂಪಿಸಿರುವೆನು

೧೮೨. ಈ ಭೂಮಂಡಲದ ವಿಸ್ತಾರ, ಸುತ್ತಳತೆ, ಸಪ್ತದ್ವೀಪಗಳ ಸಂಖ್ಯೆ ಮೊದಲಾದುವನ್ನು ಹೇಳಿರುವುದರಿಂದ ಪ್ರಧಾನಪರಿಣಾಮರೂಪವಾದ ವಿಶ್ವದ ಸ್ವರೂಪವನ್ನು ನಿರೂಪಿಸಿದಂತೆಯೇ ಆಗಿದೆ.

೧೮೩. ಈ ಸಮಸ್ತವಾದ ಜಗತ್ತೆಲ್ಲ ಶ್ರೀಭಗವಂತನಿಗೆ ಅಧಿಷ್ಠಾನಭೂತವಾಗಿದೆ. ಹೀಗೆ ಸಪ್ತಭೂತಗಳೂ ಪರಸ್ಪರಸಂಬಂಧಗಳಾಗಿ ಆ ಭಗವಂತನಲ್ಲಿ ಪಾತ್ರೆಗಳಂತೆ ಅಡಗಿಕೊಂಡಿವೆ.

ಏತಾವಾಗ್ ಸನ್ನಿವೇಶಸ್ತು ಮಯಾಶಕ್ಯಃ ಪ್ರಭಾಷಿತುಂ ।
ಏತಾವದೇವ ಶ್ರೋತವ್ಯಂ ಸನ್ನಿವೇಶೇ ತು ಪಾರ್ಥಿವ ॥ ೧೮೪ ॥

ಸಪ್ತ ಪ್ರಕೃತಯಸ್ತ್ವೇತಾ ಧಾರಯಂತಿ ಪರಸ್ಪರಂ ।
ತಾಸ್ವಲ್ಪಪರಿಮಾಣೇನ ಪ್ರಸಂಖ್ಯಾತುಮಿಹೋಚ್ಯತೇ ॥
ಅಸಂಖ್ಯೇಯಾಃ ಪ್ರಕೃತಯಸ್ತಿರ್ಯಗೂರ್ಧ್ವಮಧಶ್ಚ ಯಾಃ ॥ ೧೮೫ ॥

ತಾರಕಾಸನ್ನಿವೇಶಶ್ಚ ಯಾವದ್ದಿವ್ಯಂ ತು ಮಂಡಲಂ ।
ಮರ್ಯಾದಾಸನ್ನಿವೇಶಸ್ತು ಭೂಮೇಸ್ತದನುಮಂಡಲಂ ॥
ಅತಃ ಪರಂ ಪ್ರವಕ್ಷ್ಯಾಮಿ ಪೃಥಿವ್ಯಾಂ ವೈ ದ್ವಿಜೋತ್ತಮಾಃ ॥ ೧೮೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ಏಕೋನಪಂಚವಿಂಶೋಽಧ್ಯಾಯಃ

---

೧೮೪. ನಾನು ತಿಳಿದ ಇಷ್ಟು ವಿಷಯಗಳನ್ನು ಮಾತ್ರ ನಿಮಗೆ ತಿಳಿಸಲು ಸಾಧ್ಯವೇ ಹೊರತು ಹೆಚ್ಚಿಗೆ ತಿಳಿಸಲು ಸಾಧ್ಯವಿಲ್ಲ. ಎಲೈ ರಾಜನೇ, ನೀನು ಕೇಳತಕ್ಕದ್ದೂ ತಿಳಿಯಬೇಕಾದುದೂ ಇಷ್ಟೇ ಸರಿ. ಹೆಚ್ಚಿಗೆ ಏನೂ ಇಲ್ಲವೆಂದನು.

೧೮೫. ಪಂಚಭೂತ ಮಹತ್ತತ್ವಪ್ರಕೃತಿಯೆಂಬ ಈ ಏಳು ಪ್ರಕೃತಿಗಳು ಆಶ್ರಯಾಶ್ರಯಭಾವದಿಂದಿವೆ. ಅವುಗಳಲ್ಲಿ ದೊಡ್ಡದು, ಸಣ್ಣದು ಎಂಬ ಸಾಮಾನ್ಯ ಪರಿಮಾಣದಿಂದ ನಿರೂಪಿತವಾಗಿವೆ. ಮೇಲೆ, ಕೆಳಗೆ, ಸುತ್ತಮುತ್ತಲೂ ಇರುವ ಸಣ್ಣಪ್ರಕೃತಿಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ತಿಳಿಸಲು ಸಾಧ್ಯವಿಲ್ಲ. ಅವು ಅಪರಿಮಿತಗಳಾಗಿವೆ.

೧೮೬. ಎಲೈ ಮಹರ್ಷಿಗಳಿರಾ, ಇದುವರೆಗೂ ಜಂಬೂದ್ವೀಪವೇ ಮೊದಲಾದ ಸಪ್ತದ್ವೀಪಗಳನ್ನೂ ಸಮುದ್ರಗಳನ್ನೂ ನಿಮಗಾಗಿ ತಿಳಿಸಿರುವೆನು. ಈಗ ನಕ್ಷತ್ರಗಳೇ ಮೊದಲಾದ ಖಗೋಳಗತವಾದ ವಿಷಯಗಳನ್ನೂ, ನಕ್ಷತ್ರಾದಿಮಂಡಲಗಳನ್ನೂ ಅವುಗಳ ಪರಿಮಾಣ, ಸನ್ನಿವೇಶವೇ ಮೊದಲಾದವನ್ನೂ, ಭೂಮಿಗೂ ನಕ್ಷತ್ರಾದಿಮಂಡಲಗಳಿಗೂ ಇರುವ ಪರಿಮಾಣಾದಿಗಳನ್ನೂ ವಿವರಿಸುವೆನು ಕೇಳಿರಿ ಎಂದು ಸೂತಮುನಿಯು ಮುನಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಸಪ್ತದ್ವೀಪ ನಿರೂಪಣೆ" ಯೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾದುದು.

# ನಲವತ್ತೊಂಬತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪ್ಲಕ್ಷದ್ವೀಪವೇ ಮೊದಲಾದ ದ್ವೀಪಗಳ ವಿಷಯವು ನಿರೂಪಿತಗಳಾಗಿವೆ. ಪ್ಲಕ್ಷದ್ವೀಪವು ಜಂಬೂದ್ವೀಪಕ್ಕಿಂತಲೂ ದ್ವಿಗುಣ ವಿಸ್ತಾರವಾಗಿದೆ. ಅದರಲ್ಲಿ ಸಪ್ತವರ್ಷಗಳೂ ಪರ್ವತಗಳೂ ಇವೆ. ಅವು ಗೋಮೇದ, ಚಂದ್ರದ್ವೀಪ, ನಾರದ, ದುಂದುಭಿ, ಸೋಮಕ, ಸುಮನಸ್ಸು, ವೈಭ್ರಾಜವೆಂಬ ಏಳುಪರ್ವತಗಳಾಗಿವೆ ಆಯಾ ವರ್ಷಗಳಿಗೆ ಆಯಾ ಪರ್ವತಗಳ ನಾಮಗಳೇ ಬಂದಿವೆ. ಅವುಗಳಲ್ಲಿ ದೇವಾದಿಗಳೂ ಮಹರ್ಷಿಗಳೂ ವಾಸಿಸುವರು. ಅನೇಕ ನದಿಗಳೂ ಇರುತ್ತವೆ.

ಶಾಲ್ಮಲೀದ್ವೀಪವು ಪ್ಲಕ್ಷದ್ವೀಪಕ್ಕಿಂತಲೂ ದೊಡ್ಡದು. ಅದರಲ್ಲಿ ಕುಮುದ, ಉನ್ನತ, ಬಲಾಹಕ, ದ್ರೋಣ, ಕಂಕ, ಮಹಿಷ, ಕಕುದ್ಮಂತವೆಂಬ ಏಳು ಗಿರಿಗಳೂ ಮಹಾನದಿಗಳೂ ರತ್ನಗಳ ಗಣಿಗಳೂ ಇವೆ ಮುತ್ತು, ಶ್ವೇತ, ಲೋಹಿತ, ಜೀಮೂತ, ಹರಿತ, ವೈದ್ಯುತ, ಮಾನಸ, ಸುಪ್ರಭೆ, ಎಂಬ ವರ್ಷಗಳೂ ಇವುಗಳಲ್ಲಿ ಕ್ರಮವಾಗಿ ಪಾನಿತೋಯಾ, ವಿತೃಷ್ಣಾ, ಚಂದ್ರಾ, ಶುಕ್ರಾ, ವಿಮೋಚಿನೀ, ನಿವೃತ್ತಿ ಸಪ್ತನದಿಗಳೂ ಇವೆ. ಈ ಶಾಲ್ಮಲೀದ್ವೀಪದ ಸುತ್ತಲೂ ಸುರಾಸಮುದ್ರವಿರುವುದು

ಹೀಗೆಯೇ ಕುಶದ್ವೀಪದಲ್ಲಿಯೂ ವಿದ್ರುಮ, ಹೇಮ, ದ್ಯುತಿಮಂತ, ಪುಷ್ಪವಂತ, ಕುಶೇಶಯ, ಹರಿಮಂದರವೆಂಬ ಸಪ್ತ ಪರ್ವತಗಳೂ ಉದ್ಭಿದ, ವೇಣುಮಂಡಲ ಸ್ವೈರಥ, ಲವಣ, ಧೃತಿಮಂತ, ಪ್ರಭಾಕರ, ಕಪಿಲವೆಂಬ ಸಪ್ತ ವರ್ಷಗಳೂ ಇವೆ. ಅದರಲ್ಲಿ ದೇವಗಂಧರ್ವರೇ ಮೊದಲಾದವರು ವಾಸಿಸುವರು. ಅದರ ಸುತ್ತಲೂ ಘೃತ ಸಮುದ್ರವಿರುವುದು

ಕ್ರೌಂಚದ್ವೀಪವು ಕುಶದ್ವೀಪಕ್ಕಿಂತಲೂ ದ್ವಿಗುಣ ವಿಸ್ತಾರವಾಗಿದೆ. ಅದರ ಸುತ್ತಲೂ ಘೃತ ಸಮುದ್ರವಿರುವುದು. ಅದರಲ್ಲಿ ಕ್ರೌಂಚವೇ ಮೊದಲಾದ ಸಪ್ತ ಗಿರಿಗಳೂ ಕುಶಲಿಯೇ ಮೊದಲಾದ ಸಪ್ತ ವರ್ಷಗಳೂ ಇವೆ. ಅದರ ಸುತ್ತಲೂ ದೊಡ್ಡದಾದ ಮೊಸರಿನ ಸಮುದ್ರವಿರುತ್ತದೆ. ಶಾಕದ್ವೀಪವು ಕ್ರೌಂಚಕ್ಕಿಂತಲೂ ದೊಡ್ಡದು.

ಅಲ್ಲಿಯೂ ಮೇರುಗಿರಿಯೇ ಮೊದಲಾದ ಸಪ್ತ ಗಿರಿಗಳೂ ಜಲದವೇ ಮೊದಲಾದ ಸಪ್ತವರ್ಷಗಳೂ ಶಾಕವೃಕ್ಷವೂ ಸುಕುಮಾರವೇ ಮೊದಲಾದ ನದಿಗಳೂ ಸುತ್ತಲೂ ಕ್ಷೀರಸಾಗರವೂ ವರ್ಣಾಶ್ರಮಾಚಾರಧರ್ಮಗಳೂ ಇವೆ. ಪುಷ್ಕರದ್ವೀಪವು ಶಾಕ ದ್ವೀಪಕ್ಕೆ ದ್ವಿಗುಣವಾಗಿದೆ. ಅದರ ಸುತ್ತಲೂ ಸ್ವಾದೂದಕ ಸಮುದ್ರವಿದೆ. ಬ್ರಹ್ಮ ವಿಷ್ಣು ಮಹೇಶ್ವರರು ಸಾಕ್ಷಾತ್ತಾಗಿ ನಿಂತು ಪ್ರಜಾರಕ್ಷಣೆಮಾಡುವುದರಿಂದ ಜಾತಿ ಸಾಂಕರ್ಯಾದಿಗಳಿರುವುದಿಲ್ಲ ಆ ದ್ವೀಪದ ಸುತ್ತಲೂ ಕಾಂಚನಭೂಮಿಯೂ ಅನಂತರ ಲೋಕಾಲೋಕಪರ್ವತವೂ ತರುವಾಯ ಬ್ರಹ್ಮಾಂಡವು ಅದರಲ್ಲಿ ಭೂತಾದಿ ಲೋಕಗಳೂ ಸಪ್ತದ್ವೀಪಗಳೂ ಇವೆ. ಬ್ರಹ್ಮಾಂಡದ ಹೊರಗೆ ಘನೋದಧಿಯೂ ಅದರ ಸುತ್ತಲೂ ನಿಬಿಡತೇಜಸ್ಸೂ ತರುವಾಯ ನಿಬಿಡವಾತವು ಆಮೇಲೆ ಆಕಾಶವೂ ಅನಂತರ ಭೂತಗಳೂ ನಂತರ ಮಹತ್ತತ್ವವೂ ಇವೆ. ಇವು ಒಂದಕ್ಕೊಂದು ಆಶ್ರಯ ವಾಗಿದೆ. ಇವೆಲ್ಲಕ್ಕೂ ಅನಂತ ನಾಮಕನಾದ ಶ್ರೀ ಭಗವಂತನೇ ಆಶ್ರಯನಾಗಿರುವನು ಎಂಬ ಈ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತಗಳಾಗಿವೆ.

